# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 28ನೇ ಜುಲೈ, 2014
(ಸಮಯ: ಬೆಳಗ್ಗೆ 11.00 ಗಂಟೆಗೆ)

----

### 1. ವರದಿಗಳನ್ನೊಪ್ಪಿಸುವುದು

1. ಶ್ರೀ ಪಿ.ಎಂ. ನರೇಂದ್ರಸ್ವಾಮಿ (ಅಧ್ಯಕ್ಷರು, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿ) ಅವರು 2013-14ನೇ ಸಾಲಿನ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿಯ ಎರಡನೇ ವರದಿಯನ್ನು ಒಪ್ಪಿಸುವುದು.
2. ಶ್ರೀ ತನ್ವೀರ್‌ಸೇಠ್ (ಅಧ್ಯಕ್ಷರು, ಸರ್ಕಾರಿ ಭರವಸೆಗಳ ಸಮಿತಿ) ಅವರು 2013-14ನೇ ಸಾಲಿನ ಸರ್ಕಾರಿ ಭರವಸೆಗಳ ಸಮಿತಿಯ ಎರಡನೇ ವರದಿಯನ್ನು ಒಪ್ಪಿಸುವುದು.
3. ಶ್ರೀ ಕೆ.ಬಿ. ಕೋಳಿವಾಡ್ (ಅಧ್ಯಕ್ಷರು, ಹಕ್ಕುಬಾಧ್ಯತಾ ಸಮಿತಿ) ಅವರು 2013-14ನೇ ಸಾಲಿನ ಹಕ್ಕುಬಾಧ್ಯತಾ ಸಮಿತಿಯ ಎರಡನೇ ಮತ್ತು ಮೂರನೇ ವರದಿಗಳನ್ನೊಪ್ಪಿಸುವುದು.
4. ಶ್ರೀ ಹೆಚ್.ಡಿ. ರೇವಣ್ಣ (ಅಧ್ಯಕ್ಷರು, ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿ)ಅವರು 2013-14ನೇ ಸಾಲಿನ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ಎರಡನೇ ಮತ್ತು ಮೂರನೇ ವರದಿಗಳನ್ನೊಪ್ಪಿಸುವುದು.
5. ಶ್ರೀ ಎನ್.ಹೆಚ್.ಶಿವಶಂಕರ ರೆಡ್ಡಿ (ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಅರ್ಜಿಗಳ ಸಮಿತಿ) ಅವರು 2013-14ನೇ ಸಾಲಿನ ಅರ್ಜಿಗಳ ಸಮಿತಿಯ ಹದಿನೇಳನೇ ವರದಿಯನ್ನೊಪ್ಪಿಸುವುದು.
6. ಶ್ರೀ ಬಿ. ಸುರೇಶ್‌ಗೌಡ (ಅಧ್ಯಕ್ಷರು, ಸಭೆಯ ಮುಂದಿಡಲಾದ ಕಾಗದ ಪತ್ರಗಳ ಸಮಿತಿ) ಅವರು 2013-14ನೇ ಸಾಲಿನ ಸಭೆಯ ಮುಂದಿಡಲಾದ ಕಾಗದ ಪತ್ರಗಳ ಸಮಿತಿಯ ಇಪ್ಪತ್ತೊಂಬತ್ತು ಮತ್ತು ಮೂವತ್ತನೇ ವರದಿಗಳನ್ನೊಪ್ಪಿಸುವುದು.

### 2. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

(ಸದಸ್ಯರಿಗೆ ಈಗಾಗಲೇ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಮೂರನೇ ಹಾಗೂ ನಾಲ್ಕನೇ ಪಟ್ಟಿಯ ರೀತ್ಯಾ)

# 3. ಶಾಸನ ರಚನೆ

## I. ವಿಧೇಯಕಗಳನ್ನು ಮಂಡಿಸುವುದು

**(i) ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ (ತಿದ್ದುಪಡಿ)ವಿಧೇಯಕ, 2014**
**ಶ್ರೀ ಕೃಷ್ಣ ಭೈರೇಗೌಡ (ಕೃಷಿ ರಾಜ್ಯ ಸಚಿವರು) ಅವರು:-**

ಅ) 2014ನೇ ಸಾಲಿನ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

**(ii) ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ)ವಿಧೇಯಕ, 2014**
**ಶ್ರೀ ಟಿ.ಬಿ.ಜಯಚಂದ್ರ (ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳು, ಶಾಸನ ರಚನೆ,ಪಶುಸಂಗೋಪನೆ ಮತ್ತು ಮುಜರಾಯಿ ಸಚಿವರು) ಅವರು:-**

ಅ) 2014ನೇ ಸಾಲಿನ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## II. ವಿಧೇಯಕಗಳನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

**(i) ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ (ತಿದ್ದುಪಡಿ)ವಿಧೇಯಕ, 2014**
**ಶ್ರೀ ಕೃಷ್ಣ ಭೈರೇಗೌಡ (ಕೃಷಿ ರಾಜ್ಯ ಸಚಿವರು) ಅವರು:-**

ಅ) 2014ನೇ ಸಾಲಿನ **ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ** (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**(ii) ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ)ವಿಧೇಯಕ, 2014**
**ಶ್ರೀ ಟಿ.ಬಿ.ಜಯಚಂದ್ರ (ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳು, ಶಾಸನ ರಚನೆ, ಪಶುಸಂಗೋಪನೆ ಮತ್ತು ಮುಜರಾಯಿ ಸಚಿವರು) ಅವರು:-**

ಅ) 2014ನೇ ಸಾಲಿನ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**ಮು.ತಿ.ನೋ.,**

## 4. ವಿತ್ತೀಯ ಕಾರ್ಯಕಲಾಪಗಳು

ಅ) 2014-15ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಗಳ ಮೇಲೆ ಮುಂದುವರಿದ ಚರ್ಚೆ ಹಾಗೂ ಸರ್ಕಾರದ ಉತ್ತರ ಮತ್ತು ಮತಕ್ಕೆ ಹಾಕುವುದು.

| ಬೇಡಿಕೆ ಸಂಖ್ಯೆ | ಬೇಡಿಕೆಯ ಹೆಸರು |
|---|---|
| 23 | ಕಾರ್ಮಿಕ |
| 10 | ಸಮಾಜ ಕಲ್ಯಾಣ |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 25 | ಕನ್ನಡ ಮತ್ತು ಸಂಸ್ಕೃತಿ |
| 09 | ಸಹಕಾರ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 19 | ನಗರಾಭಿವೃದ್ಧಿ |
| 16 | ವಸತಿ |
| 06 | ಮೂಲಭೂತ ಸೌಕರ್ಯಗಳ ಅಭಿವೃದ್ಧಿ |
| 05 | ಒಳಾಡಳಿತ ಮತ್ತು ಸಾರಿಗೆ |
| 26 | ಯೋಜನೆ, ವಿಜ್ಞಾನ ಮತ್ತು ತಂತ್ರಜ್ಞಾನ |
| 15 | ಮಾಹಿತಿ ತಂತ್ರಜ್ಞಾನ |
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ |
| 18 | ವಾಣಿಜ್ಯ ಮತ್ತು ಕೈಗಾರಿಕೆ |

ಆ) 2014-15ನೇ ಸಾಲಿನ ಪೂರಕ ಅಂದಾಜುಗಳ ಮೇಲೆ (ಮೊದಲನೇ ಕಂತು) ಚರ್ಚೆ ಮತ್ತು ಮತಕ್ಕೆ ಹಾಕುವುದು.

**ಪು.ತಿ.ನೋ.,**

## 5. ಅಧಿಕೃತ ನಿರ್ಣಯ

**ಶ್ರೀ ಟಿ.ಬಿ. ಜಯಚಂದ್ರ, ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳು, ಶಾಸನ ರಚನೆ ಮತ್ತು ಪಶುಸಂಗೋಪನೆ ಸಚಿವರು:-**

"ಭಾರತ ಸಂವಿಧಾನದ ಭಾಗ-xvii ರ ಅಧ್ಯಾಯ iii ರಲ್ಲಿನ ಅನುಚ್ಛೇದ 348(2)ರ ಮೇರೆಗೆ ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದಲ್ಲಿನ ನಡವಳಿಕೆಗಳನ್ನು ರಾಜ್ಯದ ಅಧಿಕೃತ ಭಾಷೆಯಾದ ಕನ್ನಡದಲ್ಲಿ ನಡೆಸಲು ಅನುವಾಗುವಂತೆ ರಾಜ್ಯ ಘನತೆವೆತ್ತ ರಾಜ್ಯಪಾಲರು, ಘನತೆವೆತ್ತ ರಾಷ್ಟ್ರಪತಿಗಳ ಪೂರ್ವಾನುಮತಿ ಪಡೆಯಬೇಕೆಂದು ಈ ಸದನವು ಸರ್ವಾನುಮತದಿಂದ ಒತ್ತಾಯಿಸುವುದು".

## 6. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಇಪ್ಪತ್ತಾರನೇ ಪಟ್ಟಿ**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಇಪ್ಪತ್ತಾರನೇ ಪಟ್ಟಿ**

**ಪಿ.ಓಂಪ್ರಕಾಶ**
ಕಾರ್ಯದರ್ಶಿ

*Raj N*

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)